ಮುಂಜಾವು
ವಾರಪತ್ರಿಕೆ.
ಸಂಪಾದಕ: ನಿಲಿಮನೆ ನಾಗರಾಜ್
'MUNJAVU' Kannada Weekly. KOPPA - CHM. ಫೋನ್: 114
5ನೇ ವರ್ಷ 31ನೇ ಸಂಚಿಕೆ ಕೊಪ್ಪ 26-4-1987 ಭಾನುವಾರ ಬೆಲೆ 50 ಪೈಸೆ



# ಬಂಡಾಯಗಳು, ಅನಿರೀಕ್ಷಿತ ಫಲಿತಾಂಶಗಳು

ಕೊಪ್ಪ: ಮಂಡಲಗಳಿಗೆ "ಜಿಲ್ಲಾ ಪರಿಷತ್ ವತಿಯಿಂದ" ನಾಮಕರಣಗೊಂಡ ಸದಸ್ಯರುಗಳಿಂದಾಗಿ ಶೃಂಗೇರಿ ಕ್ಷೇತ್ರದ ಹಲವು ಕಡೆ ಫಲಿತಾಂಶವು ಆಡಳಿತ ಪಕ್ಷದ ಕಡೆ ಒಲಿದಿರುವುದು ಸಾಲದೆಂಬಂತೆ, ಇನ್ನು ಕೆಲವು ಕಡೆ ಬೇರೆ ಬೇರೆ ಕಾರಣಗಳಿಗಾಗಿ ಹಲವು ಅನಿರೀಕ್ಷಿತ ಫಲಿತಾಂಶಗಳು ಬಂದಿವೆ.

ಹರಿಹರಪುರ ಮಂಡಲದಲ್ಲಿ ಜನತಾಕ್ಕೆ 7, ಕಾಂಗ್ರೆಸ್‌ಗೆ 5, ಬಿ.ಜೆ.ಪಿ.ಗೆ 3 ಸ್ಥಾನಗಳು ಬಂದಿದ್ದು, ಒಬ್ಬ ಪಕ್ಷೇತರ ಸದಸ್ಯರ ಬೆಂಬಲ ಬಿಜೆಪಿಗೆ ಎನ್ನಲಾಗಿತ್ತು. ಇಲ್ಲಿ ಬಿಜೆಪಿಯ ಬಿ. ಎಂ ರಘುನಾಥ್‌ರಿಗೆ ಅಧ್ಯಕ್ಷ ಪಟ್ಟ ಬಿಟ್ಟುಕೊಡಲು ನಿಶ್ಚಯಿಸಿದ ಕಾಂಗ್ರೆಸ್ ಉಪಾಧ್ಯಕ್ಷ ಸ್ಥಾನಕ್ಕೆ ಅಸಗೋಡಿನ ಎ. ಎಸ್. ನಾಗೇಶರನ್ನು ತನ್ನ ಅಭ್ಯರ್ಥಿಯನ್ನಾಗಿ ನಿಲ್ಲಿಸಿತ್ತು.

ಆದರೆ ಕಾಂಗ್ರೆಸ್‌ನ ಕಗ್ಗ ಲಿಂಗಪ್ಪ ನಾಯ್ಕ್ ಬಿಜೆಪಿಗೆ ಅಧ್ಯಕ್ಷಸ್ಥಾನ ಕೊಡುವುದನ್ನು ವಿರೋಧಿಸಿದ್ದಲ್ಲದೆ, ತನ್ನ 'ಹಿರಿತನ'ದ (ಸೀನಿಯಾರಿಟಿ) ಹಿನ್ನೆಲೆಯಲ್ಲಿ ಅಧ್ಯಕ್ಷಸ್ಥಾನವನ್ನೇ ಕೇಳಿದ್ದರೆನ್ನಲಾಗಿದೆ.

ಇಬ್ಬರ ನಾಮಕರಣ ಸದಸ್ಯರು ಸೇರಿ ಜನತಾದ ಬಲ 9, ಕಾಂಗ್ರೆಸ್-ಬಿಜೆಪಿ ಕೂಟದ ಬಲವೂ 9 ಆಗಿ ಲಾಟರಿ ಮೂಲಕ ಅಧ್ಯಕ್ಷ-ಉಪಾಧ್ಯಕ್ಷರನ್ನು ಆರಿಸುವ ಸಂದರ್ಭ ಬಂದಿತ್ತು. ಆದರೆ ಚುನಾವಣೆಯ ದಿನ ಲಿಂಗಪ್ಪ ನಾಯ್ಕ್ ಮತದಾನಕ್ಕೆ ಗೈರು ಹಾಜರಾದ ಕಾರಣ ಜನತಾದ ಎ. ಆರ್. ಜಯಪ್ರಕಾಶ್ ಅಧ್ಯಕ್ಷರಾಗಿ ಆಯ್ಕೆಯಾದರು.

ನರಸಿಂಹರಾಜಪುರ ತಾಲ್ಲೂಕಿನ ಬಿ. ಕಣಬೂರು (ಬಾಳೆಹೊನ್ನೂರು) ಮಂಡಲಕ್ಕೆ ಕೆ. ಸಿ. ವೆಂಕಟೇಶ್ ಮತ್ತು ಕೃಷ್ಣಸ್ವಾಮಿ ಅಧ್ಯಕ್ಷರಾಗಿ ಅವಧಿ ಹಂಚಿಕೊಳ್ಳುವ ನಿರ್ಣಯದ ಮೇರೆಗೆ ಕೃಷ್ಣಸ್ವಾಮಿ ಅಧಿಕೃತ ಅಭ್ಯರ್ಥಿಯಾಗಬೇಕಿತ್ತು. ಆದರೆ ವೆಂಕಟೇಶ್ ಅವರೇ ಸ್ಪರ್ಧಿಸಿ ಆಯ್ಕೆಯಾದರು.

**ಶೃಂಗೇರಿ ಕಾಂಗ್ರೆಸ್ಸೊಳಗೆ 'ಬಂಡಾಯ'**

ಎಲ್ಲಕ್ಕಿಂತ ಅನಿರೀಕ್ಷಿತ ಫಲಿತಾಂಶ ಒದಗಿಸಿದ ಅಸಾಧಾರಣ ಚುನಾವಣೆ ನಡೆದುದು ಶೃಂಗೇರಿ ತಾಲ್ಲೂಕಿನ ಮರ್ಕಲ್ (ಕಿಗ್ಗ) ಮಂಡಲದಲ್ಲಿ. ಇಲ್ಲಿ ಕಾಂಗ್ರೆಸ್ಸೊಳಗೇ ಎರಡು ಗುಂಪಾಗಿ ಉಂಟಾದ ಉದ್ವಿಗ್ನತೆಯಿಂದಾಗಿ ಸೆಕ್ಷನ್ 144 ರನ್ವಯ ನಿಷೇಧಾಜ್ಞೆ ವಿಧಿಸಲಾಯಿತು.

ಇಲ್ಲಿ ಕಾಂಗ್ರೆಸಿಗೆ 13, ಜನತಾಕ್ಕೆ ನಾಮಕರಣ ಸದಸ್ಯರು ಸೇರಿ ಕೇವಲ 7 ಸ್ಥಾನಗಳು ಇದ್ದು, ಹುಲ್ಸೆ ಸುಬ್ಬಣ್ಣ ಮತ್ತು ಚಂದ್ರಶೇಖರ ನಾಯ್ಕ ಕಾಂಗ್ರೆಸ್‌ನ ಅಧಿಕೃತ ಅಭ್ಯರ್ಥಿಗಳಾಗಿದ್ದರು. ಆದರೆ ಕಾಂಗ್ರೆಸ್‌ನ ಕೆ. ಟಿ. ಚಂದ್ರಹಾಸ ಗೌಡರು ಪ್ರಧಾನ ಪದವಿಗೆ ಸ್ಪರ್ಧಿಸಿದಾಗ ಜನತಾದವರು ಅವರಿಗೆ ಬೆಂಬಲ ನೀಡಿದರು. ಕಾಂಗ್ರೆಸ್‌ನ ಹೂವಪ್ಪ ಗೌಡರನ್ನು ಉಪಪ್ರಧಾನ ಹುದ್ದೆಗೆ ನಿಲ್ಲಿಸಿ ಈ ಗುಂಪು ಪದ್ಮ ಎಂಬ ದಲಿತ ಮಹಿಳಾ ಸದಸ್ಯರ 'ಬೆಂಬಲ'ದೊಂದಿಗೆ ತನ್ನ ಸಂಖ್ಯೆಯನ್ನು 10 ಕ್ಕೇರಿಸಿಕೊಂಡಿತು. ಸಮ ಬಲದಿಂದಾಗಿ ಲಾಟರಿ ಮೂಲಕ ನಿರ್ಣಯಿಸಿದಾಗ ಎರಡೂ ಸ್ಥಾನಗಳು ಈ ಗುಂಪಿಗೇ ಲಭಿಸಿದವು.

**ಕಾಂಗ್ರೆಸ್ ಆಕ್ರೋಶ**

ಈ ಘಟನೆಯಿಂದ ಆಕ್ರೋಶಗೊಂಡಿರುವ ಶೃಂಗೇರಿ ಕಾಂಗ್ರೆಸ್ ಮುಖಂಡರುಗಳು, ಶ್ರೀಮಂತಿಕೆಯ ದಬ್ಬಾಳಿಕೆಯಿಂದ ಬಡವನೊಬ್ಬ ಅಧ್ಯಕ್ಷನಾಗುವ ಅವಕಾಶವನ್ನು ಕಿತ್ತುಕೊಳ್ಳಲಾಯಿತೆಂದು ದೂರಿದ್ದಾರೆ. ಪದ್ಮ ಅವರ ಗಂಡ ಪಂಚಾಯ್ತಿ ಜವಾನನಾಗಿದ್ದು, ಅವರನ್ನು ದೂರಕ್ಕೆ ವರ್ಗ ಮಾಡಿಸುವ ಬೆದರಿಕೆಯೊಡ್ಡಿ ಅವರ ಪತ್ನಿಯ ಬೆಂಬಲಕ್ಕೆ ಒತ್ತಾಯಿಸಿದ್ದಲ್ಲದೆ ಆಕೆಯನ್ನು ಕಾನೂನು ಬಾಹಿರವಾಗಿ ಒತ್ತೆಯಾಗಿಟ್ಟುಕೊಂಡು ಪ್ರಜಾಪ್ರಭುತ್ವದ ನೀತಿಗಳ ಮೇಲೆ ದೌರ್ಜನ್ಯ ಎಸಗಿದ್ದಾರೆಂದು ಆಪಾದಿಸಿದ್ದಾರೆ.

"ಬಂಡಾಯ ಅಭ್ಯರ್ಥಿಗಳಾಗಿ ನಮ್ಮ ಸಹಕಾರ ಕೇಳಿದರು. ನಮಗೆ ಬಹುಮತ ಇಲ್ಲದ್ದರಿಂದ ನಾವು ಅವರಿಗೆ ರಾಜಕೀಯವಾಗಿ ಬೆಂಬಲ ನೀಡಿದ್ದೇವೆ"-ಇದು ಜನತಾದವರ ಸಮರ್ಥನೆ.

**ಅಮಾನತಿಗೆ ನಿರ್ಣಯ**

13 ಸದಸ್ಯರ ಪೈಕಿ 11 ಸದಸ್ಯರ ಬೆಂಬಲ ಪಡೆದ ಅಧಿಕೃತ ಅಭ್ಯರ್ಥಿ ಸುಬ್ಬಣ್ಣನವರ ವಿರುದ್ಧ ಸ್ಪರ್ಧಿಸಿದ್ದಕ್ಕಾಗಿ ಚಂದ್ರಹಾಸ ಗೌಡ ಮತ್ತು ಹೂವಪ್ಪ ಗೌಡ ಇವರನ್ನು, ಅವರಿಗೆ ಬೆಂಬಲವಾಗಿ ಪಕ್ಷವಿರೋಧಿ ಚಟುವಟಿಕೆ ನಡೆಸಿದ್ದಕ್ಕಾಗಿ ಡಾ। ಹುಲ್ಸೆ ಮಂಜಪ್ಪಗೌಡ, ಎ. ಎಂ. ಶ್ರೀಕಂಠ ಗೌಡ ಮತ್ತು ಬೆಂಬಲಿಸಿ ಮತ ನೀಡಿದ ಪದ್ಮ ಅವರನ್ನು ಹಾಗೂ ಇದೇ ಕಾರಣಕ್ಕೆ ಕೊಪ್ಪ ತಾ॥ ಕಾಂಗ್ರೆಸ್‌ನ ಮಾಜಿ ಅಧ್ಯಕ್ಷ ವಿಜಗ ಶ್ರೀನಿವಾಸ್‌ರನ್ನು ಪಕ್ಷದಿಂದ ಉಚ್ಚಾಟಿಸಬೇಕೆಂದು ಶೃಂಗೇರಿ ತಾ॥ ಕಾಂಗ್ರೆಸ್ ನಿರ್ಣಯಮಾಡಿ ಪಕ್ಷದ ವರಿಷ್ಠರಿಗೆ ಕಳಿಸಿದೆ. ಅಲ್ಲದೆ ಪಕ್ಷದ ಚಿಹ್ನೆಯ ಮೇಲೆ ಸ್ಪರ್ಧಿಸಿ ಗೆದ್ದಿದ್ದ ಈ ಮೂವರು ಸದಸ್ಯತ್ವವನ್ನು ಪಕ್ಷಾಂತರ ನಿಷೇಧ ಕಾಯಿದೆಯನ್ವಯ ರದ್ದುಗೊಳಿಸಬೇಕೆಂದೂ ಜಿಲ್ಲಾಧಿಕಾರಿಗಳನ್ನು ಒತ್ತಾಯಿಸಿ ನಿರ್ಣಯ ಮಾಡಿದೆ.

(ಶೃಂಗೇರಿ ವರದಿ: ಕಲ್ಕುಳಿ ವಿಠಲಹೆಗ್ಡೆ)

## ಇನಾಂ ಭೂಮಿ ಅಧಿಭೋಗದ ಹಕ್ಕು: ಅರ್ಜಿ ಸಲ್ಲಿಸಲು ಅವಧಿ ವಿಸ್ತರಣೆ

ಕೊಪ್ಪ: ಇನಾಂ ಭೂಮಿಗಳ ಅಧಿಭೋಗದಾರಿಕೆ ಹಕ್ಕನ್ನು ಕೋರಿ ಅರ್ಜಿ (ಡಿಕ್ಲೇರೇಶನ್) ಸಲ್ಲಿಸಲು ರಾಜ್ಯ ಸರ್ಕಾರವು 30-6-87 ರವರೆಗೆ ಅವಧಿಯನ್ನು ವಿಸ್ತರಿಸಿದೆ. ಹೆಚ್ಚಿನ ವಿವರಗಳನ್ನು ತಾ॥ ತಹಸೀಲ್ದಾರರ ಕಚೇರಿಯಿಂದ ಪಡೆಯಬಹುದು.

ಶೃಂಗೇರಿ ಕ್ಷೇತ್ರದ ಮೂರೂ ತಾಲ್ಲೂಕುಗಳ

## ಮಂಡಲ ಪ್ರಧಾನ, ಉಪ ಪ್ರಧಾನರು

ಶೃಂಗೇರಿ: ಈ ಕ್ಷೇತ್ರದ ಮೂರೂ ತಾಲ್ಲೂಕುಗಳಲ್ಲಿ ಆಯ್ಕೆಯಾಗಿರುವ ಮಂಡಲ ಪಂಚಾಯ್ತಿ ಪ್ರಧಾನ ಮತ್ತು ಉಪ ಪ್ರಧಾನರ ಹೆಸರುಗಳು ಹೀಗಿವೆ:

**ಶೃಂಗೇರಿ ತಾಲ್ಲೂಕು**

ವಿದ್ಯಾರಣ್ಯಪುರ: ಎಚ್.ಜಿ. ಶಿವಪ್ಪ, ಕೆ. ಎಸ್. ಶ್ರೀಧರರಾವ್; ಮೆಣಸೆ: ಎಂ.ಆರ್. ಶ್ರೀನಿವಾಸಯ್ಯ, ಶ್ರೀಮತಿ ಶಕುಂತಳ; ನೆಮ್ಮಾರು: ಎಂ. ಜಿ. ಸುಧಾಕರ್, ಕಾಳಯ್ಯ; ಮರ್ಕಲ್: ಚಂದ್ರಹಾಸ ಗೌಡ, ಹೂವಪ್ಪಗೌಡ.

**ಕೊಪ್ಪ ತಾಲ್ಲೂಕು**

ಹರಂದೂರು: ಜಿ. ಡಿ. ಪರಮೇಶ್ವರ, ಎಸ್. ಪಿ. ಚಂದ್ರಶೇಖರ್; ಹೇರೂರು: ಕೆ. ಎಸ್. ರವೀಂದ್ರ; ಎಚ್. ದಯಾನಂದ; ಹರಿಹರಪುರ: ಎ. ಆರ್. ಜಯಪ್ರಕಾಶ್; ಬಿ. ಕೆ. ಕೃಷ್ಣ ಶೆಟ್ಟಿ; ಅಗಳಗಂಡಿ: ಕೆ. ಸಿ. ಸತೀಶ್, ರಂಗಣ್ಣ; ನಿಲುವಾಗಿಲು; ಎಚ್. ಎಂ. ಕೃಷ್ಣಮೂರ್ತಿ, ವಿಠಲನಾಯ್ಕ; ಚಾವಲ್ಮನೆ: ಕುಸುರಿಗೆ ಕೃಷ್ಣಪ್ಪ, ಎಮ್. ಎಸ್. ಶ್ರೀಪಾದ ಜೋಯಿಸ್; ಬಿಂತ್ರವಳ್ಳಿ: ಕೆ. ವಸಂತ ಅಜಿಲ, ಕೆ. ಎಸ್. ಶಾಂತಾರಾಂ; ಜಯಪುರ: ಎ. ಸಿ. ವಜ್ರಪ್ಪ. ಎಸ್.ಎ. ಸುಂದರ; ನರಸೀಪುರ: ಕೆ. ಎಸ್. ಕಾಡಪ್ಪ, ಎಂ. ಆರ್. ಜಯಪ್ರಕಾಶ್; ಅತ್ತಿಕೊಡಿಗೆ: ಬಿ. ಎನ್. ಭಾಸ್ಕರ್, ಕೆ. ಆರ್. ದೇವೇಂದ್ರ; ತುಳುವಿನಕೊಪ್ಪ: ಎ. ವಿ. ಆನಂದರಾಮ ಭಟ್, ಮುತ್ತಮ್ಮ.

**ನ. ರಾ. ಪುರ ತಾಲ್ಲೂಕು**

ಮುತ್ತಿನಕೊಪ್ಪ: ಹೆಚ್.ಟಿ. ರಾಜೇಂದ್ರ, ಸುಬ್ಬಯ್ಯ; ಮೆಣಸೂರು: ಎ. ಜಿ. ಬೆಳ್ಳಿಗೌಡ, ಎಸ್. ಆರ್. ಕೃಷ್ಣಯ್ಯ; ಬಾಳೆ: ಬಿ ಎಸ್. ತಿಮ್ಮಯ್ಯ, ಎ. ಪಿ. ಚೆರಿಯನ್; ಸೀತೂರು: ಎಸ್. ಡಿ. ವಿ. ಗೋಪಾಲರಾವ್, ಬಿ. ಕೆ. ನಾರಾಯಣಸ್ವಾಮಿ; ಆಡುವಳ್ಳಿ: ಜಿ. ಲಕ್ಷ್ಮೀನಾರಾಯಣ ರಾವ್, ದುಗ್ಗಯ್ಯ; ಬಿ. ಕಣಬೂರು: ಕೆ. ಸಿ. ವೆಂಕಟೇಶ್, ಕೆ. ನೂರ್ ಅಹ್ಮದ್; ಬನ್ನೂರು: ಫ್ರೆಡ್ರಿಕ್ ಡಿ. ಕುನ್ಹ, ಎಸ್ ಎಂ. ಮುರುಗೇಶ್.

**ಬಲಾಬಲ**

ಶೃಂಗೇರಿ: ಜನತಾ-3, ಬಂಡಾಯ ಕಾಂಗ್ರೆಸ್-1; ಕೊಪ್ಪ: ಜನತಾ-7, ಕಾಂಗ್ರೆಸ್-4; ನ.ರಾ. ಪುರ: ಜನತಾ-6, ಪಕ್ಷೇತರ -1

ಶಾಟ್‌ಪುಟ್ ಪ್ರವೀಣ ಕೊಪ್ಪದ ಎಸ್. ಡಿ. ಈಶನ್

# ಉದಯೋನ್ಮುಖ ರಾಷ್ಟ್ರೀಯ ಕ್ರೀಡಾಪಟು



ಕೊಪ್ಪದ ಬಳಿಯ ಶಿವಪುರದವರಾದ ಎಸ್. ಡಿ. ಈಶನ್ ರಾಷ್ಟ್ರೀಯ ಮಟ್ಟದಲ್ಲಿ ಶಾಟ್ ಪುಟ್ ಮತ್ತು ಡಿಸ್ಕಸ್‌ನಲ್ಲಿ ಉತ್ತಮ ಯಶಸ್ಸು ಗಳಿಸುತ್ತ ಮೇಲೇರುತ್ತಿದ್ದಾರೆ. ಮಂಗಳೂರಿನಲ್ಲಿ ಮುಂದಿನ ತಿಂಗಳು ನಡೆಯಲಿರುವ ರಾಷ್ಟ್ರೀಯ ಕ್ರೀಡಾಕೂಟಕ್ಕೆ ಪೂರ್ವಭಾವಿಯಾಗಿ ಎನ್. ಐ. ಎಸ್. ತರಬೇತಿಗೆ ಹೋಗುವ ಮುನ್ನ ಕೇವಲ ಒಂದೆರಡು ದಿನದ ಮಟ್ಟಿಗೆ ಅವರು ಊರಿಗೆ ಬಂದಿದ್ದಾಗ ಯುಗಾದಿಯಂದು ಅವರನ್ನು 'ಮುಂಜಾವು' ಪರವಾಗಿ ಸಂದರ್ಶಿಸಲಾಯಿತು.

ಕಿರಿಯ ವಯಸ್ಸಿನಲ್ಲೇ ಖ್ಯಾತಿಯ ಹಾದಿಯಲ್ಲಿ ತ್ವರಿತವಾಗಿ ಮೇಲೇರುತ್ತಿದ್ದರೂ, ಸರಳತೆ, ಸೌಜನ್ಯ, ಹಳ್ಳಿಗಾಡಿನ ಸಂಪನ್ನತೆಗಳನ್ನು ಎಳ್ಳಷ್ಟೂ ಕಳೆದುಕೊಳ್ಳದಿರುವ ಈ ಪ್ರತಿಭಾವಂತ ಯುವಕನ ಸಂದರ್ಶನದ ಮುಖ್ಯಾಂಶಗಳನ್ನು ಇಲ್ಲಿ ನೀಡಿದ್ದೇವೆ.

ಸಂದರ್ಶನ:: ಸಿರಿಮನೆ ನಾಗರಾಜ್.

### ಯಾರು ಈ ಗಲಿವರ್?

ಕಳೆದ ತಿಂಗಳು ಪುತ್ತೂರಿನಲ್ಲಿ ರಾಜ್ಯ ಮಟ್ಟದ ಅಥ್ಲೆಟಿಕ್ ಕೂಟ ನಡೆಯುತ್ತಿದ್ದ ಸಂದರ್ಭ. ಸುಮಾರು ಆರೂವರೆ ಅಡಿ ಎತ್ತರ, ಅದಕ್ಕೆ ತಕ್ಕ ಭರ್ಜರಿ ದೇಹ ದಾರ್ಢ್ಯದ ಅಜಾನು ಬಾಹು ಯುವಕನೊಬ್ಬ ಕ್ರೀಡಾಂಗಣದಲ್ಲಿ ಓಡಾಡುವಾಗೆಲ್ಲ ಪ್ರೇಕ್ಷಕರ ಗಮನ ತಂತಾನೆ ಅವನತ್ತ ಹರಿಯುತ್ತಿತ್ತು. "ಯಾರು ಈ ಗಲಿವರ್?" ಎಂದು ಎಲ್ಲರೂ ವಿಸ್ಮಯ ಪಡುವವರೇ.

ಬರೀ ನೋಡುವುದಕ್ಕೆ ಮಾತ್ರ ಅಜಾನುಬಾಹುವಲ್ಲ, ಶಾಟ್‌ಪುಟ್ ಮತ್ತು ಡಿಸ್ಕಸ್‌ಗಳೆರಡರಲ್ಲೂ ದಾಖಲೆಯೊಂದಿಗೆ ಪ್ರಥಮ ಸ್ಥಾನ ಗಳಿಸಿದ ಈ ಗಲಿವರ್ ಮತ್ತಾರು ಅಲ್ಲ. ನಮ್ಮ ಕೊಪ್ಪ ತಾಲ್ಲೂಕಿನವರೇ ಎಂದರೆ ನಿಮಗೆಲ್ಲ ಆಶ್ಚರ್ಯವಾದೀತೇನೋ.

ಇವರೇ ಎಸ್. ಡಿ. ಈಶನ್. ಕೊಪ್ಪಕ್ಕೆ ಮೂರ್ನಾಲ್ಕು ಕಿ. ಮೀ. ದೂರದಲ್ಲಿರುವ ಶಿವಪುರದ ದುಗ್ಗಪ್ಪಗೌಡರ ಕಿರಿಯ ಮಗ ಈತ. 6 ಅಡಿ 5 ಅಂಗುಲ ಎತ್ತರ, 104 ಕಿಲೋ ತೂಕವುಳ್ಳ ಈಶನ್‌ಗೆ ಈಗನ್ನೂ 24 ವರ್ಷ. ಬೆಂಗಳೂರಿನಲ್ಲಿ ದಕ್ಷಿಣ ರೈಲ್ವೆಯ ಉದ್ಯೋಗಿಯಾಗಿರುವ ಈತ ಶಾಟ್‌ಪುಟ್‌ನಲ್ಲಿ ಹಾಲಿ ರೈಲ್ವೆ ಚಾಂಪಿಯನ್. (ದಕ್ಷಿಣ ಭಾರತ ಚಾಂಪಿಯನ್ನರೂ ಹೌದು. ರಾಷ್ಟ್ರೀಯ ಮಟ್ಟದಲ್ಲಿ ಸದ್ಯಕ್ಕೆ ಇಕ್ಬಾಲ್ ಸಿಂಗ್, ಬಹಾದೂರ್ ಸಿಂಗ್ ಮತ್ತು ಬಲ್ವಿಂದರ್ ಸಿಂಗ್–ಈ ಮೂವರ ನಂತರ 4ನೇ ಸ್ಥಾನದಲ್ಲಿದ್ದಾರೆ.)

### ಮುರಿದ 'ಸಂಪ್ರದಾಯ'

ಈ ವರ್ಷದ ಜನವರಿ 31ರಂದು ನಡೆದ ರಾ॥ ರೈಲ್ವೆ ಕ್ರೀಡಾಕೂಟದಲ್ಲಿ 16 12 ಮೀ. ದೂರ ಎಸೆದು ರೈಲ್ವೇಸ್ ಚಾಂಪಿಯನ್ ಜಸ್‌ಪಾಲ್ ಸಿಂಗ್‌ರನ್ನು 2ನೇ ಸ್ಥಾನಕ್ಕೆ ತಳ್ಳಿದ ಈಶನ್ ಚಾಂಪಿಯನ್ ಆದರು. ಇದರಿಂದ ರೈಲ್ವೆಯಲ್ಲಿ ಈವರೆಗೆ ಮೊದಲ ಮೂರು ಸ್ಥಾನಗಳು ಯಾವಾಗಲೂ ಉತ್ತರ ರೈಲ್ವೆಯವರಿಗೇ ದಕ್ಕುತ್ತಿದ್ದ 'ಸಂಪ್ರದಾಯ' ಮುರಿದಂತಾಯಿತು. (ಆದರೆ ರೈಲ್ವೇಸ್‌ನಲ್ಲಿ ಈವರೆಗಿನ ಶಾಟ್‌ಪುಟ್ ದಾಖಲೆ ಜಸ್‌ಪಾಲ್ ಸಿಂಗರ 17.64ಮೀ.)

ತಪ್ಪಿದ ಅಂತರರಾಷ್ಟ್ರೀಯ ಅವಕಾಶ

ಶಾಟ್‌ಪುಟ್, ಡಿಸ್ಕಸ್‌ನಂಥ ಸ್ಪರ್ಧೆಗಳೆಂದರೆ ಅಪಾರವಾದ ತರಬೇತಿ, ತೀಕ್ಷ್ಣವಾದ ಅಭ್ಯಾಸ, ಸೂಕ್ಷ್ಮವಾದ ತಂತ್ರ ನೈಪುಣ್ಯ ಇವುಗಳು ಅತ್ಯಗತ್ಯವಾಗಿರುವಂಥವು. ಇಂಥ ತೀವ್ರ ಸಾಧನೆಯ ಹಾದಿಯಲ್ಲಿ ಸುಮಾರು 80–81ರಿಂದ ಸತತ ಅಭ್ಯಾಸದಲ್ಲಿ ನಿರತರಾದ ಈಶನ್ ಈಗಷ್ಟೇ ಯಶಸ್ಸಿನ ಹಂತವೇರುವ ಹೊಸ್ತಿಲಲ್ಲಿದ್ದಾರೆ ಆದರೂ ಅಷ್ಟರಲ್ಲೇ, ಯಾವುದೇ ಕ್ರೀಡಾಪಟುವಿನ ಸಾಧನೆಗಳ ಹಾದಿಯಲ್ಲಿ ಅತಿಪ್ರಮುಖವಾದ ಪಾತ್ರ ವಹಿಸುವ ಅಂತರ ರಾಷ್ಟ್ರೀಯ ಸ್ಪರ್ಧೆ ಅಥವಾ ತರಬೇತಿಯ ಅವಕಾಶಗಳನ್ನು ಈಗಾಗಲೇ 3 ಬಾರಿ ಬಹಳ ಸ್ವಲ್ಪದರಲ್ಲಿ ತಪ್ಪಿಸಿಕೊಂಡಿದ್ದಾರೆ.

ಮೊದಲಿಗೆ 1985ರ ಆಗಸ್ಟ್‌ನಲ್ಲಿ ಜಪಾನಿನ ಕೋಬೆ ಎಂಬಲ್ಲಿ ನಡೆದ ವಿಶ್ವ ವಾರ್ಸಿಟಿ ಕ್ರೀಡಾ ಸ್ಪರ್ಧೆಗಳಿಗೆ ಶಾಟ್‌ಪುಟ್‌ನಲ್ಲಿ ಅರ್ಹತಾ ಮಟ್ಟ 17 ಮೀ. ಇದ್ದು, ಈಶನ್ ಅವರ ಸಾಧನೆ ಅದರಲ್ಲಿ ಕೇವಲ 4 ಸೆಂ ಮಿ. ಕಡಿಮೆಯಾದುದರಿಂದ ಆಯ್ಕೆ ತಪ್ಪಿ ಹೋಯಿತು. ಅನಂತರ 86ರಲ್ಲಿ ಜರ್ಮನಿಯಲ್ಲಿ 4 ತಿಂಗಳ ತರಬೇತಿ ಶಿಬಿರಕ್ಕೆ ಆಯ್ಕೆಯಾಗುವ ಎಲ್ಲ ಅರ್ಹತೆಗಳನ್ನೂ ಹೊಂದಿದ್ದರಾದರೂ, ಭಾರತದ ಕ್ರೀಡಾರಂಗದ ಕ್ಯಾನ್ಸರ್ ಆಗಿರುವ ಕ್ರೀಡಾ ರಾಜಕೀಯದಿಂದಾಗಿ ಆ ಅವಕಾಶ ತಪ್ಪಿತು.

ಅದೇ ವೇಳೆಗೆ (ಆಗಸ್ಟ್ 86) ಕಾಮನ್‌ವೆಲ್ತ್ ಕ್ರೀಡಾಕೂಟಕ್ಕೆ ಆಯ್ಕೆಯಾದರು. ಆದರೆ ಆ ವರ್ಷ ಭಾರತ ಈ ಕೂಟವನ್ನು ಬಹಿಷ್ಕರಿಸಿದ್ದರಿಂದ ಆ ಸುಸಂಧಿಯೂ ತಪ್ಪಿಹೋಯಿತು.

### ರಷ್ಯನ್ ಕೋಚ್

ಆದರೆ ಪಾಟಿಯಾಲಾದ ರಾಷ್ಟ್ರೀಯ ಕ್ರೀಡಾ ತರಬೇತಿ ಕೇಂದ್ರ (ಎನ್. ಐ. ಎಸ್.)ದಲ್ಲಿ ತರಬೇತಿ ಕೊಡಲು ಬಂದಿದ್ದ ಜೂರಿನ್ ಎಂಬ ರಷ್ಯನ್ ಕೋಚ್ ಈ ಉದಯೋನ್ಮುಖ ಕ್ರೀಡಾಪಟುವನ್ನು ಗುರುತಿಸಿ, ಬಹಳ ಮುತುವರ್ಜಿಯಿಂದಲೂ ಆತ್ಮೀಯತೆಯಿಂದಲೂ 2 ತಿಂಗಳ ಕಾಲ ಒಳ್ಳೆಯ ತರಬೇತಿ ನೀಡಿದರು. ಅವರಿಂದ ಶಾಟ್‌ಪುಟ್‌ನ ಹಲವಾರು ತಾಂತ್ರಿಕ ಸೂಕ್ಷ್ಮತೆಗಳನ್ನು ಕಲಿತುಕೊಂಡದ್ದು ತಮ್ಮ ಸಾಧನೆಯನ್ನು ಗಣನೀಯವಾಗಿ ಹೆಚ್ಚಿಸಿಕೊಳ್ಳಲು ಕಾರಣವಾಯಿತೆನ್ನುತ್ತಾರೆ ಈಶನ್. ಆಹಾರ, ಅಭ್ಯಾಸ, ದೇಹದಾರ್ಢ್ಯ ಹಾಗೂ ದೇಹದ ಸಮರ್ಥತೆಯನ್ನು (ಫಿಟ್‌ನೆಸ್) ಕಾಯ್ದುಕೊಳ್ಳುವಿಕೆ ಈ ವಿಚಾರಗಳಲ್ಲಿ ಸಹ ಹಲವು ಸೂಕ್ಷ್ಮಗಳನ್ನು ಜೂರಿನ್ ಇವರಿಗೆ ಕಲಿಸಿಕೊಟ್ಟಿದ್ದಾರೆ.

(3ನೇ ಪುಟಕ್ಕೆ)

## ಕ್ರೀಡಾಪಟುವಿನ ತರಬೇತಿ: ವಿದೇಶಗಳಿಗೂ ಭಾರತಕ್ಕೂ ಹೋಲಿಕೆ

ಪ್ರತಿಭೆಯ ಜೊತೆಗೆ, ಒಳ್ಳೆಯ ಎತ್ತರ, ತೂಕ, ಗಂಟೆಗಟ್ಟಲೆ ತರಬೇತಿ, ಪೌಷ್ಟಿಕ ಆಹಾರ— ಇಷ್ಟು ಮಾತ್ರದಿಂದ ಒಬ್ಬ ಕ್ರೀಡಾಪಟುವಿನ ತಯಾರಿ ಆಗುವುದಿಲ್ಲ. ಯಾವ ತರದ ಆಟೋಟಕ್ಕೆ ಎಂಥ ದೇಹದಾರ್ಢ್ಯ ಅಗತ್ಯ ಮತ್ತು ಉತ್ತಮ, ಎಷ್ಟು ಎತ್ತರ-ತೂಕ ಇರುವವರಿಗೆ ಎಷ್ಟು ಬಲ (Stamina) ಇರಬೇಕು, ಯಾವ ಯಾವ ಆಹಾರವನ್ನು ಎಷ್ಟೆಷ್ಟು ಪ್ರಮಾಣದಲ್ಲಿ ಸೇವಿಸಬೇಕು, ಎಷ್ಟು ಗಂಟೆಗಳ ಕಾಲ ಅಭ್ಯಾಸ ಮಾಡಬೇಕು, ದೇಹದ ಸಾಮರ್ಥ್ಯ (Fitness)ವನ್ನು ಒಂದೇ ಸಮ ಕಾಯ್ದುಕೊಳ್ಳುವುದು ಹೇಗೆ— ಎಂಬುದೆಲ್ಲ ಬಹಳ ಮುಖ್ಯವಾಗಿರುತ್ತವೆ.

ವಿದೇಶಗಳಲ್ಲಿ, ಪ್ರತಿಯೊಬ್ಬ ಕ್ರೀಡಾಪಟುವಿನ ಬಗ್ಗೆ ಈ ಅಂಶಗಳನ್ನೆಲ್ಲ ಕಂಪ್ಯೂಟರುಗಳ ಸಹಾಯದಿಂದ ಬಹಳ ವೈಜ್ಞಾನಿಕವಾಗಿ ಹಾಗೂ ಅತ್ಯಂತ ಕರಾರುವಾಕ್ಕಾಗಿ ಲೆಕ್ಕ ಹಾಕಿ ಅದೇ ರೀತಿ ಅವರನ್ನು ಬೆಳೆಸುತ್ತಾರೆ. ಅಲ್ಲಿ ಇದೆಲ್ಲ ತರಬೇತಿಯ ಅಂಗವೇ ಆಗಿರುತ್ತದೆ. ಆದರೆ ನಮ್ಮಲ್ಲಿ ಇಂಥದೆಲ್ಲ

## ಪದ್ಯದಂಗಣ

### ಬೆಳಕಿಗೊಂದು ಹಾಡು

(ಅಥವಾ ಒಂದು ಪ್ರಾರ್ಥನೆ)

ಬೆಳಗು ಬಳ್ಳಿ ಮುಗುಳೊಡೆಯುತ<br>
ಬೆಳಕ ಬರವ ಸಾರಲಿ<br>
ಕತ್ತಲ ಹತ್ತಿಕ್ಕಿ ಮೊರೆಯಲಿ<br>
ಗಾರು ಎದೆಗಳಲ್ಲಿ ಜಿನುಗಿ<br>
ಕಾರು ಇರುಳಿನಲ್ಲಿ ಮಿನುಗಿ<br>
ಸೆಳೆ ಮಿಂಚಿನ ಮರೆಯದೋ<br>
ತೊಳಗಲಿ<br>
ದಾಹಕೆಲ್ಲ ನಿಲುಗಡೆಯೋ<br>
ಮರಳಿಗೆಲ್ಲ ಬಿಡುಗಡೆಯೋ<br>
ಹರಳುಗೊಂಡ ಬಿಳಿ ಬೆಳಕೇ<br>
ನಿನಗೆ ಸ್ವಾಗತ<br>
ನೋಯಲೆಲ್ಲ ಬಾಳ ಬವಣೆ<br>
ನೊರೆಯಲೆಲ್ಲೂ ನಗುವಿನ ಅಲೆ<br>
ತಕ್ಕುತನವು ನಡು ನಡುಗುತ<br>
ಕಾಲುಕೀಳಲಿ<br>
ಧರ ಧರ ಧರ ಬೆಳಕ ಚಿಲುಮೆ<br>
ಜಲಪಾತವು ಧುಮ್ಮಿಕ್ಕುತ<br>
ಕರಿದೈತ್ಯನ ಕರಿ ಪಾಳೆಯ<br>
ಬೆದರಿ ಅಡಗಲಿ

– ಗುರುರಾಜ ತಂತ್ರಿ ಪಣಿಯೂರು

### ಹುಬ್ಬಳ್ಳಿ ಜನ!

ಹುಬ್ಬಳ್ಳಿ ಹೆಸರು ಜನರು ಕೇಳಿರ್ಬೋದು<br>
ಈ ನಮ್ಮ ರಾಜ್ಯದೊಳಗ<br>
ಆದ್ರೆ ರಗಡು ವಿಷ್ಯ ಮಾತ್ರ ಐತಿ ಈ ಶಹರದೊಳಗ<br>
ಎಲ್ಲಾ ಜಾತಿ–ಮತದ ಜನ ಅವ್ರೆ ಆದ್ರೆ ಇಲ್ಲಿ ನೋಡ್ರಿ<br>
ಶರಣ–ಶರಣೇರು ಮಾತ್ರಾ ಭಾಳ ಅವ್ರೆ ಕಣ್ರಿ ಇಲ್ಲಿ.<br>
'ಉಳ್ಳಾಗಡ್ಡಿ', 'ಮೆಣಸಿನ ಕಾಯಿ', 'ಕೊತ್ತಂಬ್ರಿ', 'ಗಂಜಿ ಬಾಟ್ಲಿ'<br>
ಎಲ್ಲಾ ತರದ ವ್ಯಾಪಾರಾನೂ ಮಾಡ್ತಾರ್ರಿ ಜನ!<br>
ಕಚ್ಚಾ ಪಂಚೆ, ಟೋಪಿ ಮಾತ್ರ ಧರಸ್ತಾರಲ್ರಿ ಜನ<br>
ಸಿಕ್ಕಾಪಟ್ಟೆ ರೊಕ್ಕ ಹಾಂಗ ಎಣಿಸ್ತಾರಲ್ರೀ ಜನ<br>
ಲಕ್ಷ ಲಕ್ಷ ಎಣಿಸೋ ಮಂದಿ ಅವ್ರೆ ಇಲ್ಲಿ ಬಂಗ್ಲೆಯೊಳಗ<br>
ತುತ್ತೂ ಇಲ್ದೆ ಸಾಯೋ ಜನಾನೂ ಇರ್ತಾರಲ್ರೀ ಬೀದಿಯೊಳಗ<br>
ಬೀದಿಗೊಂದು ಹೋಟೆಲ್ ಗಳ್ರಿ ಎಲ್ಲ ಕಾಮತ್‌ಗಳೋದು<br>
'ಬೀರ ಶಾಪ್'ಗಳೇ ಕಾಡ್ತಾವಲ್ರಿ ಎಲ್ ನೋಡಿದ್ರೂ!<br>
ಕಳ್ಳ–ಕುಡುಕ–ರೌಡಿ ಗ್ಯಾಂಗ್ ಎಲ್ಲಾ ಬಚ್ಚಿಟ್ಗಂಡವ್ರೆ ಇಲ್ಲಿ<br>
ಸಮಯ ಸಿಕ್ರೆ ಗದ್ಲ ಹಾಕಿ ಊರೇ ಮುಳುಗುಸ್ತಾರಲ್ರೀ<br>
ಊರಿಗೆಲ್ಲಾ ಒಂದೇ ಮಠ ಅದೇ ಸಿದ್ಧಾರೂಢ ಮಠ<br>
ವರ್ಷಕ್ಕೊಮ್ಮೆ ಸೇರ್ತಾರಿಲ್ಲಿ ಜಾತ್ರೆಯೊಳ್ಗೆ ದಿಟ<br>
ಮಾತ್ ನೋಡಿದ್ರೆ ಎಸ್ ಸಿಡಕ್ ಸಿಡಕ್ ಅಂತ ಆಡ್ತಾರಲ್ರೀ<br>
ಆದ್ರೆ ಖರೇ ಹೇಳ್ರೀಕಂದ್ರೆ<br>
ಮನಸದೊಳ್ಗಿಂದ ಮಂದಿ ಮಾತ್ರ ಭಾಳ ಛಲೋ ಕಣ್ರಿ!

(ರಗಡು–ಬಹಳ, ಖರೇ–ನಿಜ, ಉಳ್ಳಾಗಡ್ಡಿ, ಮೆಣಸಿನಕಾಯಿ ಇತ್ಯಾದಿ–ಜನರ ಅಡ್ಡ ಹೆಸರುಗಳು.)

— ಶ್ರೀಂಕೆ. ಹುಬ್ಬಳ್ಳಿ

# ಈಶನ್: ಉದಯೋನ್ಮುಖ ರಾಷ್ಟ್ರೀಯ ಕ್ರೀಡಾಪಟು

(2ನೇ ಪುಟದಿಂದ)

### ಅಂತರರಾಷ್ಟ್ರೀಯ ಕೂಟಗಳಿಗಾಗಿ ಸಿದ್ಧತೆ

ಈ ಎಲ್ಲ ತರಬೇತಿ, ಮಾರ್ಗದರ್ಶನಗಳು ಹಾಗೂ ಸತತವಾದ ಅಭ್ಯಾಸದೊಂದಿಗೆ ಈಶನ್ ಈಗ ಹಲವು ಅಂತರರಾಷ್ಟ್ರೀಯ ಕ್ರೀಡಾಕೂಟಗಳಿಗಾಗಿ ಸಿದ್ಧತೆ ನಡೆಸುತ್ತಿದ್ದಾರೆ ಆಗಸ್ಟನಲ್ಲಿ ಹಾಂಕಾಂಗ್ ಅಥವಾ ಸಿಂಗಪುರದಲ್ಲಿ ನಡೆಯಲಿರುವ ಏಷ್ಯನ್ ಟ್ರ್ಯಾಕ್ ಅಂಡ್ ಫೀಲ್ಡ್ ಸ್ಪರ್ಧೆಗಳು, ನವೆಂಬರ್‌ನಲ್ಲಿ ಕಲ್ಕತ್ತದಲ್ಲಿ ನಡೆಯುವ ದಕ್ಷಿಣ ಏಷ್ಯಾ ಕ್ರೀಡಾಕೂಟ — ಇವು ಸದ್ಯದಲ್ಲಿರುವ ಇಂಥ ಎರಡು ಕೂಟಗಳು

ಇದೇ ಮೇ 8, 9 ಮತ್ತು 10 ರಂದು ಮಂಗಳೂರಿನಲ್ಲಿ ನಡೆಯುವ ರಾಷ್ಟ್ರೀಯ ಕ್ರೀಡಾಕೂಟವೇ ಏಷ್ಯನ್ ಕೂಟಕ್ಕೆ ಆಯ್ಕೆಯ ಹಂತವಾಗಿರುವುದರಿಂದ ಇದಕ್ಕೆ ಬಹಳ ಪ್ರಾಧಾನ್ಯವಿದೆ. ಇದಕ್ಕಾಗಿ ಏಪ್ರಿಲ್ ತಿಂಗಳ ಪೂರ್ತಿ ಕೆಂಗೇರಿಯ ಎನ್ ಐ ಎಸ್ ಕೇಂದ್ರದಲ್ಲಿ ತೀವ್ರ ಅಭ್ಯಾಸದಲ್ಲಿ ನಿರತರಾಗುವುದಾಗಿ ಈಶನ್ 'ಮುಂಜಾವು' ಜೊತೆ ಮಾತಾಡುತ್ತ ತಿಳಿಸಿದರು.

### ಸಾಧನೆಯ ಹಾದಿ

1978–79 ರ ಸುಮಾರಿಗೆ ಹಿರೇಕೊಡಿಗೆಯ ಲಾಲ್ ಬಹಾದುರ್ ಪ್ರೌಢಶಾಲೆಯಲ್ಲಿ ಓದುತಿದ್ದಾಗ ಅಲ್ಲಿನ ಕ್ರೀಡಾಶಿಕ್ಷಕ ಸುಧಾಕರ ರಾವ್ ಈ ಹುಡುಗನ ಪ್ರತಿಭೆಯನ್ನು ಮೊದಲು ಗುರುತಿಸಿ ಪ್ರೋತ್ಸಾಹಿಸಿದರು. ಆಗೆಲ್ಲ ಈತನ ಒಲವು ಕ್ರಿಕೆಟ್ ಕಡೆಗೆ. ಅನಂತರ 79 ರಲ್ಲಿ ತೀರ್ಥಹಳ್ಳಿಯಲ್ಲಿ ಪ್ರಥಮ ಪಿ ಯು ಸಿ ಮುಗಿಸಿ ಎರಡನೆ ವರ್ಷಕ್ಕಾಗಿ 80 ರ ಆಗಸ್ಟನಲ್ಲಿ ಮೈಸೂರಿನ ಜೆ ಎಸ್ ಎಸ್ ಕಾಲೇಜಿಗೆ ಸೇರಿದಾಗ ಈತನ ಕ್ರೀಡಾ ಜೀವನದ ಬಾಗಿಲು ತೆರೆಯಿತೆನ್ನಬಹುದು.

ಅಲ್ಲಿ ವಿಶ್ವವಿದ್ಯಾನಿಲಯದ ಉತ್ಸಾಹಿ ಕೋಚ್ ಚಿಕ್ಕವೆಂಕಟಪ್ಪನವರು ಈತನಿಗೆ "ಕ್ರಿಕೆಟ್ ಬರೀ ರಾಜಕೀಯದಿಂದ ತುಂಬಿದೆ. ಪ್ರತಿಭೆಗೆ, ಸಾಮರ್ಥ್ಯಕ್ಕೆ ಅಲ್ಲಿ ಪುರಸ್ಕಾರ ಸಿಗುವುದು ಬಹಳ ಕಷ್ಟ. ಅದಕ್ಕಿಂತ ಯಾವುದಾದರೂ ಅಥ್ಲೆಟಿಕ್ಸನಲ್ಲಿ ಸಾಧನೆ ಮಾಡು" ಎಂದು ಸಲಹೆ ಮಾಡಿದರು. ಆಗ ಆಯ್ದುಕೊಂಡಿದ್ದು ಶಾಟ್‌ಪುಟ್ ಮತ್ತು ಡಿಸ್ಕಸ್. ಅನಂತರ, ಅತ್ಯುತ್ತಮ ಕೋಚ್‌ಗಳಲ್ಲೊಬ್ಬರಾದ ರವಿಸಿಂಗ್ ಶಾಟ್‌ಪುಟ್‌ನಲ್ಲಿ ಆರಂಭಿಕ ತರಬೇತಿಯನ್ನು ಚೆನ್ನಾಗಿ ನೀಡಿದರು. ಇನ್ನೊಬ್ಬ ಕೋಚ್ ಆಳ್ವ ಅವರಿಂದಲೂ ಒಂದೆರಡು ತಿಂಗಳು ಮಾರ್ಗದರ್ಶನ.

82ರ ಆಗಸ್ಟನಲ್ಲಿ ಬೆಂಗಳೂರಿನಲ್ಲಿ ಕ್ರೀಡಾ ಹಾಸ್ಟೆಲ್ ಆರಂಭವಾದಾಗ ಮೊದಲ ಬ್ಯಾಚ್‌ನಲ್ಲೇ ಆಯ್ಕೆಯಾಯಿತು. ಅಲ್ಲಿ ಆಗ ಸಹಾಯಕ ನಿರ್ದೇಶಕರಾಗಿದ್ದ (ಈಗ ನಿರ್ದೇಶಕರು) ಭಾರತದ ಖ್ಯಾತ ಹಾಕಿಪಟು ಎಂ.ಪಿ. ಗಣೇಶ್ ಇವರ ಬೆಳವಣಿಗೆಗೆ ಬಹಳ ಉತ್ತೇಜನ ಕೊಟ್ಟರು. ಅಲ್ಲೇ ಸೈಂಟ್ ಜೋಸೆಫ್ಸ್ ಕಾಲೇಜಿನಲ್ಲಿ ಈಶನ್ ಬಿ.ಎ. ಪದವಿ ಪಡೆದರು. ಆದರೆ ಡಿಗ್ರಿ ಪೂರೈಸುವ ಮೊದಲೇ ರೈಲ್ವೆಯಲ್ಲಿ ನೌಕರಿ ಹಿಡಿದಿದ್ದರು. (85)

ಕ್ರೀಡಾ ಹಾಸ್ಟೆಲಿನಲ್ಲಿರುತ್ತ ರಾಷ್ಟ್ರೀಯ ವಾರ್ಸಿಟ ಸ್ಪರ್ಧೆಗಳಲ್ಲಿ 1982ರಲ್ಲಿ 2ನೇ ಸ್ಥಾನ ಪಡೆದ ಈಶನ್, 83-84-85ರಲ್ಲಿ 2 ಬಾರಿ ರಾಷ್ಟ್ರೀಯ ವಿ.ವಿ. ಚಾಂಪಿಯನ್ ಆದರಲ್ಲದೆ 83ರಲ್ಲಿ ರಾಜ್ಯ ದಾಖಲೆಯನ್ನೂ ನಿರ್ಮಿಸಿದರು

### ತರಬೇತಿ, ಪ್ರೋತ್ಸಾಹ ಕುರಿತು

ಭಾರತದ ಕ್ರೀಡಾರಂಗದಲ್ಲಿ 2ನೇ ಸ್ಥಾನದಲ್ಲಿರುವ ರೈಲ್ವೆಯಲ್ಲಿ ಕ್ರೀಡೆಗೆ ಪ್ರೋತ್ಸಾಹ ಚೆನ್ನಾಗಿಯೇ ಇದೆ ಅದರಲ್ಲೂ ಈಗಿನ ರೈಲ್ವೆ ಮಂತ್ರಿ, ಯುವಕ ಸಿಂಧಿಯಾ ಕ್ರೀಡೆಗೆ ಒಳ್ಳೆಯ ಉತ್ತೇಜನ ಕೊಡುತ್ತಿದ್ದಾರೆ ಎನ್ನುತ್ತಾರೆ ಈಶನ್.

ಆದರೆ ಒಟ್ಟಾರೆ ದೇಶದ ಕ್ರೀಡಾ ಕ್ಷೇತ್ರದಲ್ಲಿನ ರಾಜಕೀಯದ ಬಗ್ಗೆ ಕೇಳಿದಾಗ, "ಈಗ ಪರಿಸ್ಥಿತಿ ಎಷ್ಟೋ ಸುಧಾರಿಸಿದೆ" ಎಂದು ಅವರು ಹೇಳಿದರೂ ಇದೊಂದು ಔಪಚಾರಿಕ ಮಾತು ಮಾತ್ರ ಎಂಬುದು ಬಹುಶಃ ಅವರಿಗೂ ಗೊತ್ತು.

ಕೇರಳ, ಪಂಜಾಬ್, ಹರಿಯಾಣಗಳಿಗೆ ಹೋಲಿಸಿದರೆ ನಮ್ಮ ರಾಜ್ಯದಲ್ಲಿ ಕ್ರೀಡೆಯಲ್ಲಿ ಆಸಕ್ತಿ ಬಹಳ ಕಮ್ಮಿ ಎಂದು ಅವರು ಹೇಳುತ್ತಾರೆ.

ಇನ್ನು, ನಮ್ಮ ದೇಶದ ಕ್ರೀಡಾ ಉತ್ತೇಜನದ. ಬಹುಪಾಲು ಕ್ರಿಕೆಟ್‌ಗಾಗಿಯೇ ಮೀಸಲಾದಂತಿದೆ. ಕ್ರಿಕೆಟ್ ಸೇರಿದ... ಎಲ್ಲಾ ಆಟಗಳ ಆಟಗಾರರು 'ವೃತ್ತಿ ನಿ... (ಪ್ರೊಫೆಶನಲ್ಸ್) ಕ್ರೀಡಾಪಟುಗಳಾ... ಬಹುದು. ಆದರೆ ಅಂತರ ರಾಷ್ಟ್ರೀಯ ನಿ... ಮಗಳ ಪ್ರಕಾರ ಅಥ್ಲೀಟ್‌ಗಳು ಹಾ... ಆಗುವಂತಿಲ್ಲ. (ವೃತ್ತಿ ನಿರತ ಕ್ರೀಡಾಪ... ಗಳು ಯಥೇಚ್ಛವಾಗಿ ಹಣ ಸಂಪಾ... ಸಬಹುದು) ಆದ್ದರಿಂದ ನಮ್ಮ ದೇಶದ... ಕಡೇ ಪಕ್ಷ ಕ್ರಿಕೆಟ್‌ಗೆ ಕೊಟ್ಟಷ್ಟು (... ಕಾರಿ) ಉತ್ತೇಜನವನ್ನಾದರೂ ಅಥ್ಲೆಟಿಕ... ಗೆ ಕೊಡಬೇಕು ಎಂಬುದು ಅಥ್ಲೀಟ್... ಹಾಗೂ ಅಥ್ಲೆಟಿಕ್ಸ್ ಪ್ರೇಮಿಗಳ ಬೇಡಿ... ಅದು ಇನ್ನೂ ಈಡೇರಿಕೆಯ ಹಂತಕ್ಕೆ ... ಬೇಕಾಗಿದೆ ಅಷ್ಟೇ ಎನ್ನುತ್ತಾರೆ ಈಶನ್.

ಈ ನಿಟ್ಟಿನಲ್ಲಿ ರಾಜೀವ್ ಗಾಂಧಿಯವ... ನಿಜವಾಗಿಯೂ ಸುಧಾರಣೆ ತರುವ ನಿರೀ... ಯಿದೆ. ಹೊರದೇಶಗಳ ಕ್ರೀಡಾಕೂಟಗಳ... ಭಾಗವಹಿಸ ಬಯಸುವ ಕ್ರೀಡಾಪಟುಗಳ... ನಿಜವಾಗಿಯೂ ಅಂತರರಾಷ್ಟ್ರೀಯ ಮಟ್ಟ... ಅರ್ಹತೆಯಿದ್ದರೆ ಮಾತ್ರ ಹೋಗಲು ಅವ... ಅನುಮತಿ ಕೊಡುತ್ತಿದ್ದಾರೆ. ಆದರೆ, ಇನ... ಕ್ರಮಬದ್ಧವಾಗಿ ಬಹಳ ಸುಧಾರಣೆ ಮಾ... ವುದಿದೆ. ಬಹಳ ಹಣವನ್ನೂ ತೊಡ... ಬೇಕಿದೆ ಎನ್ನುತ್ತಾರೆ ಅವರು.

ಮಲೆನಾಡಿನ ಈ ಹೆಮ್ಮೆಯ ಕ್ರೀ... ಪಟು ಅಂತರ ರಾಷ್ಟ್ರೀಯ ಖ್ಯಾತಿಗೇ... ಎಂದು 'ಮುಂಜಾವು' ಆತ್ಮೀಯವ... ಹಾರೈಸುತ್ತದೆ.

---

## ವಾಹನಮಾಲೀಕರಿಗೆ ಸೂಚನೆ

ಚಿಕ್ಕಮಗಳೂರು: ಲಾರಿ, ಟ್ರಾಕ್ಟರ್–ಟ್ರೈಲರ್ಸ್, ಆಮ್ನಿಬಸ್, ಡ್ರಿಲ್ಲಿಂಗ್ ರಿಗ್, ಅ.ಭಾ. ಟೂರಿಸ್ಟ್ ಆಮ್ನಿಬಸ್ ಮತ್ತು ಸ್ಟೇಜ್ ಕ್ಯಾರೇಜ್‌ಗಳ ಮೇಲಿನ ತೆರಿಗೆಯನ್ನು ಏ. 1ರಿಂದ ರಾಜ್ಯ ಸರ್ಕಾರವು ಹೆಚ್ಚಿಸಿದ್ದು, ಸದರಿ ವಾಹನಗಳ ಮಾಲೀಕರು ವಾಹನ ತೆರಿಗೆ ಮತ್ತು ಈಹೆ ಚ್ಚುವರಿ ತೆರಿಗೆಗಳನ್ನು ಕೂಡಲೇ ಪಾವತಿಸಿ ತೆರಿಗೆ ಪತ್ರದಲ್ಲಿ ನಮೂದಿಸಿಕೊಳ್ಳಬೇಕೆಂದು ಪ್ರಾದೇಶಿಕಸಾರಿಗೆ ಅಧಿಕಾರಿ ಕೋರಿದ್ದಾರೆ.

## ರಬ್ಬರ್ ಬೋರ್ಡ್ ವಿಳಾಸ

ರಬ್ಬರ್ ಬೋರ್ಡಿನ ಮಂಗಳೂರು ವಲಯ ಕಚೇರಿಯ ವಿಳಾಸ: ಡೆಪ್ಯುಟಿ ಡೆವಲಪ್‌ಮೆಂಟ್ ಆಫೀಸರ್, ರಬ್ಬರ್ ಬೋರ್ಡ್ ರೀಜಿನಲ್ ಆಫೀಸ್, ಕುಡ್ವಾಸ್ ಲೇನ್, ಮಣ್ಣಗುಡ್ಡೆ. ಮಂಗಳೂರು–3 (ಫೋ: 21229)

ರಬ್ಬರ್ ಬೆಳೆಯ ಬಯಸುವವರು ಸಂಬಂಧಿಸಿದ ಅರ್ಜಿ ಫಾರಂಗಳಿಗಾಗಿ 'ಮುಂಜಾವು' ಕಚೇರಿಯನ್ನಾಗಲಿ, ಅಥವಾ ಶ್ರೀ ಯು. ಎಂ. ಗಂಗಾಧರ್, ಕಾರ್ಯದರ್ಶಿ, ಸ್ವಯಂ ಸೇವಾ ಕೇಂದ್ರ, ಉತ್ತಮೇಶ್ವರ, ಕೊಪ್ಪ ತಾ॥ ಇವರನ್ನಾಗಲಿ ಸಂಪರ್ಕಿಸಬಹುದು.

## ಚಂದಾದಾರರಲ್ಲಿ ವಿನಂತಿ

ಚಂದಾ ಹಣ ಬಾಕಿ ಉಳಿಸಿಕೊಂಡಿರುವ ಓದುಗರು ದಯವಿಟ್ಟು ಶೀಘ್ರವಾಗಿ ಕಳಿಸಿಕೊಟ್ಟು ಸಹಕರಿಸಬೇಕಾಗಿ ಕೋರಿಕೆ. ವಾರ್ಷಿಕ ಚಂದಾ 25 ರೂ.

## ನಮ್ಮನ್ನಗಲಿದ ಬೇಳೆಗದ್ದೆ ಪುಟ್ಟಣ್ಣ ಗೌಡರು

—ಒಂದು ಸ್ಮರಣೆ

ಇತ್ತೀಚೆಗೆ ನಮ್ಮನ್ನಗಲಿದ ಕೊಪ್ಪ ತಾ। ಹೊಸಕೊಪ್ಪ ಬಳಿಯ ಬೇಳೆಗೆದ್ದೆ ಪುಟ್ಟಣ್ಣ ಗೌಡರು ಕೊಪ್ಪ ತಾಲ್ಲೂಕಿನ ಅತ್ಯಂತ ಹಿರಿಯ ರಾಜಕಾರಣಿಗಳಲ್ಲೊಬ್ಬರು.

ಅವರು ಆ ಕಾಲದಲ್ಲಿ ಪ್ರಜಾಪ್ರತಿನಿಧಿ ಸಭೆ, ಜಿಲ್ಲಾ ಬೋರ್ಡು. ತಾಲ್ಲೂಕಾ ಬೋರ್ಡುಗಳಲ್ಲಿ - ಸದಸ್ಯರಾಗಿ ಸಾರ್ವಜನಿಕರ, ಮುಖ್ಯವಾಗಿ ಮಲೆನಾಡಿನ ಹಿತಾಸಕ್ತಿಯ ವಿಷಯಗಳಲ್ಲಿ ಬಹಳ ಪ್ರಾಮಾಣಿಕವಾಗಿ ದುಡಿದವರು. ಅಲ್ಲದೆ, ತಾಲ್ಲೂಕು ಸಲಹಾ ಸಮಿತಿ, ಆಸ್ಪತ್ರೆ ಸಮಿತಿ, ಸಹಕಾರ ಸಂಘ ಮುಂತಾದುವುಗಳಲ್ಲೂ ಸದಸ್ಯರಾಗಿ ಸೇವೆ ಸಲ್ಲಿಸಿದರು. ಆಗ ನಡೆಯುತ್ತಿದ್ದ ಜಿಲ್ಲಾ ಸಮ್ಮೇಳನ, ತಾ। ಸಮ್ಮೇಳನಗಳಲ್ಲಿ ಬಹಳ ಸಕ್ರಿಯವಾಗಿ ಭಾಗವಹಿಸಿ ಸಾರ್ವಜನಿಕ ಬೇಡಿಕೆಗಳ ಬಗ್ಗೆ ಸಮರ್ಥವಾಗಿ ವಾದ ಮಾಡುತ್ತಿದ್ದರು.

ಎಲ್ಲಾ ಸಂದರ್ಭಗಳಲ್ಲೂ ಗಾಂಧೀ ತತ್ವಗಳನ್ನು ಅನುಷ್ಠಾನಕ್ಕೆ ತರುವ ವಿಚಾರದಲ್ಲಿ ಕಂಚಿನ ಕಂಠದಿಂದ ವಾದ ಮಾಡುತ್ತಿದ್ದರು. ಕಾಂಗ್ರೆಸ್ ಪಕ್ಷದ ಬಗ್ಗೆ ಸದಾ ಗೌರವವಿಟ್ಟಿದ್ದು ಪಕ್ಷದ ಕಾರ್ಯವನ್ನು ನಿರ್ವಂಚನೆಯಿಂದ ಮಾಡುತ್ತಿದ್ದರು.

ಪುಟ್ಟಣ್ಣ ಗೌಡರು ಯಾವುದೇ ಆಮಿಷಗಳಿಗೆ ಬಲಿಯಾಗುವವರಲ್ಲ ನನಗೆ ತಿಳಿದ ಹಾಗೆ, ತಮ್ಮ ರಾಜಕೀಯ ಸ್ಥಾನಮಾನ ಬಳಸಿ, ಆಸ್ತಿ, ಹಣ ಸಂಪಾದಿಸಿದ್ದು ಕೇಳಿಲ್ಲ. ಸದಾ ಖಾದಿ ಪಂಚೆ, ಜುಬ್ಬಾ, ಕಪ್ಪು ಕೋಟಿನಿಂದ ಜನ ಸಮುದಾಯದಲ್ಲಿ ಎದ್ದು ಕಾಣುತ್ತಿದ್ದರು.

ಸುಮಾರು 50 ವರ್ಷಗಳಿಂದ ಅವರ ಸ್ನೇಹಿತನಾಗಿದ್ದ ನನಗೆ ಹಲವು ಕಮಿಟಿಗಳಲ್ಲಿ ಅವರೊಟ್ಟಿಗೆ ಕೆಲಸ ನಿರ್ವಹಿಸಿದ ಸ್ಮರಣೀಯ ಅನುಭವವಿದೆ. ಅವರ ವಾದಗಳೂ, ಮಾತುಗಳೂ ತೀಕ್ಷ್ಣವಾಗಿದ್ದರೂ ವಿಚಾರದಲ್ಲಿ ಸತ್ಯಾಂಶ ಹೆಚ್ಚಿಗೆ ಇರುತಿತ್ತು. ಯಾವುದೇ ಕಾರ್ಯಕಲಾಪಗಳಲ್ಲಿ ... ಪ್ರಾಯ ಭೇದದಿಂದ ವ್ಯಾಜ್ಯವಾಡಿದ... ನಂತರ ವಿಶ್ವಾಸದಿಂದಲೇ ಮಾತನಾಡಿಸ... ಸೌಜನ್ಯದ ವ್ಯಕ್ತಿ ಅವರಾಗಿದ್ದರು.

ಇಂತಹ ಒಬ್ಬ ಹಿರಿಯ ರಾಜಕಾ... ಯನ್ನು ಕಳೆದು ಕೊಂಡ ಕೊಪ್ಪ ತಾ... ಕಿನ, ಅಷ್ಟೇಕೆ, ಇಡೀ ಮಲೆನಾಡಿನ ಜ... ಅಪಾರ ನಷ್ಟ ಹೊಂದಿದ್ದಾರೆ ಎಂ... ತಪ್ಪಿಲ್ಲ.

ಟಿ. ವಿ. ಎಸ್. ಹೇ...
ತುಳುವಿನಕೊಪ್ಪ, ಕ...

---

ಸಂಖ್ಯೆ : ಸಿಆರ್‌ಸಿ/20/86–87.

ತಹಸೀಲ್ದಾರ್‌ರವರ ಕಾರ್ಯಾಲಯ
ಕೊಪ್ಪ ತಾಲ್ಲೂಕು, ಕೊಪ್ಪ
ದಿನಾಂಕ : 21–4–1987

## ಪ್ರ ಕ ಟ ಣೆ

ಕೊಪ್ಪ ತಾಲ್ಲೂಕು ಸಮಸ್ತ ಜನರಿಗೆ ತಿಳಿಯಪಡಿಸುವುದೇನೆಂದು ಶ್ರೀಮತಿ ಲೂಯಿಜ ಅರೋನರವರು 5641 64–65 ನಂಬರುವುಳ್ಳ ಸಿಆರ್... ಯನ್ನು ಪಡೆದಿದ್ದು, ಕಾರಣಾಂತರದಿಂದ ಕಳೆದುಕೊಂಡಿರುತ್ತೇವೆಂದು ದಿನಾಂ... 28–3–87 ರಂದು ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ. ಸಿಆರ್‌ಸಿಗೆ ಸಂಬಂಧಪಟ್ಟ... ವಿಸ್ತೀರ್ಣವು ಈ ಕೆಳಕಂಡಂತೆ ಇರುತ್ತೆ :

| | | |
|---|---|---|
| ಚಿತ್ತದಕೊಳಲು ಗ್ರಾಮ ಸ. ನಂ. | 48 | 3–2½ |
| | 51 | 20—00 |
| | | 23—02½ |

ಆದುದರಿಂದ ಯಾರಿಗಾದರೂ ಸಿಕ್ಕಿದ್ದಲ್ಲಿ ಈ ಪ್ರಕಟಣೆ ಪ್ರಕಟವಾದ ... ದಿನದೊಳಗೆ ಈ ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಒಪ್ಪಿಸುವುದು ಅಥ... ಯಾರಿಂದಲಾದರೂ ತಕರಾರು ಇದ್ದರೆ ತಿಳಿಸುವುದು. 7 ದಿವಸಗಳ ನಂ... ಬರುವ ಆಕ್ಷೇಪಣೆ ಏನೂ ಇಲ್ಲವೆಂದು ಭಾವಿಸಿ ಶ್ರೀಮತಿ ಲೂಯಿಜ ಅರೋ... ಮಕ್ಕಳಿಗೆ ಬದಲಾವಣೆ ಮಾಡಿಕೊಡಲಾಗುವುದು

ಸಹಿ
ತಹಸೀಲ್ದಾರ್,
ಕೊಪ್ಪ ತಾಲ್ಲೂಕು.

## ದಲಿತ ಸಂಘರ್ಷ ಸಮಿತಿ ಪದಾಧಿಕಾರಿಗಳು

ಚಿಕ್ಕಮಗಳೂರು: ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಸಂಚಾಲಕರಾಗಿ ಕಲ್ಲಯ್ಯ, ಸಂಘಟನಾ ಸಂಚಾಲಕರಾಗಿ ಪಿ. ವೇಲಾಯುಧನ್, ಖಜಾಂಚಿಯಾಗಿ ಸಂತವೇರಿ ಜವರಪ್ಪ ಇವರುಗಳು ಆಯ್ಕೆಯಾಗಿದ್ದಾರೆ.

ಮಾ. 29ರಂದು ಡಿ. ಧ್ರುವನಾರಾಯಣ ಅವರ ಅಧ್ಯಕ್ಷತೆಯಲ್ಲಿ ನಡೆದ ಸರ್ವ ಸದಸ್ಯರ ಸಭೆಯಲ್ಲಿ ಜಿಲ್ಲೆಯ ಎಲ್ಲ ತಾಲ್ಲೂಕುಗಳಿಂದ ಕಾರ್ಯಕರ್ತರು ಭಾಗವಹಿಸಿದ್ದು ಎಂ.ಎನ್. ಸೋಮಶೇಖರ್ ಚುನಾವಣಾಧಿಕಾರಿಯಾಗಿ ಭಾಗವಹಿಸಿದ್ದರು. ಈವರೆಗೆ ಜಿಲ್ಲಾ ಸಂಚಾಲಕರಾಗಿದ್ದು ರಾಜ್ಯ ಸಂಘಟನಾ ಸಂಚಾಲಕರಾಗಿ ಆಯ್ಕೆಯಾಗಿರುವ ಎಂ.ಡಿ. ಗಂಗಯ್ಯ ಜಿಲ್ಲಾ ಸಮಿತಿಯ ವರದಿಯನ್ನು ಮಂಡಿಸಿದರು ಇನ್ನೊಬ್ಬ ಸಂಘಟನಾ ಸಂಚಾಲಕರಾದ ಕೋಲಾರದ ಎನ್. ವೆಂಕಟೇಶ್ ಕಾರ್ಯಕರ್ತರಲ್ಲಿ ಶಿಸ್ತು ಮತ್ತು ಜವಾಬ್ದಾರಿಯ ಕುರಿತು ಮಾತನಾಡಿದರು.

### ತೆರೆಯದ ಉಳಿತಾಯ ಖಾತೆ? ತಡವಾಗಿ ಬಂದ ಪಾಸ್‌ಬುಕ್

ಉತ್ತಮೇಶ್ವರ: ಕಳೆದ ವರ್ಷ ಸಣ್ಣ ಉಳಿತಾಯ ಸಂಗ್ರಹಣೆಯ ಭರಾಟೆಯಲ್ಲಿ ಇಲ್ಲಿನ ವಿ. ಎಸ್. ವಿಶ್ವೇಶ್ವರ ರಾವ್ ಎಂಬವರಿಂದ ಅವರ ಸೋದರಿಯರಿಬ್ಬರ ಹೆಸರಲ್ಲಿ ಉಳಿತಾಯ ಖಾತೆ ತೆರೆಯಲು ಬಿಡಿಒ ಅವರು ಸಂಗ್ರಹಿಸಿದ್ದ 400 ರೂ. ಗಳ ಬಗ್ಗೆ ಖಾತೆ ತೆರೆಯದೆ ಹಣ ದುರುಪಯೋಗವಾಗಿದೆಯೆಂದು ಸದರಿಯವರು ಪತ್ರಿಕೆಗೆ ದೂರಿದ್ದರು. ಈ ವಿಚಾರ ಬಿಡಿಒ ಅವರಿಗೆ ತಿಳಿಸಿದಾಗ "ಗ್ರಾಮ ಸೇವಕರಾಗಿದ್ದ ಸುಂದರ ಶೆಟ್ಟಿಯವರ ಜವಾಬ್ದಾರಿಗೆ ವಹಿಸಲಾಗಿತ್ತು; ವಿಚಾರಿಸಿ ಸರಿಪಡಿಸುತ್ತೇನೆ" ಎಂದು ತಿಳಿಸಿದ್ದರು. ಇದೀಗ ಪಾಸ್‌ಪುಸ್ತಕ ಬಂದಿರುವುದಾಗಿ ವಿಶ್ವೇಶ್ವರ್ ತಿಳಿಸಿದ್ದಾರೆ.

### ವೇದ ಶಿಕ್ಷಾವರ್ಗ

ಹರಿಹರಪುರ: ಇಲ್ಲಿನ ವೇದ ಶಿಕ್ಷಣ ಬಳಗದ ಆಶ್ರಯದಲ್ಲಿ 20 ದಿನಗಳ ವೇದ ಶಿಕ್ಷಾವರ್ಗವನ್ನು ಏ. 12ರಂದು ಬಿ. ಜಿ. ಚಿದಂಬರ್ ಅಧ್ಯಕ್ಷತೆಯಲ್ಲಿ ಜಿ. ಪುಟ್ಟಪ್ಪ ಉದ್ಘಾಟಿಸಿದರು. ಸಿ. ಎಚ್. ಆನಂದ ನಾಯಕ್ ಪುಸ್ತಕ ಪ್ರದರ್ಶನ ಉದ್ಘಾಟಿಸಿದರು. ಹರಿಹರಪುರ ಮಠಾಧೀಶರು ಆಶೀರ್ವಚನ ನೀಡಿದರು. ಬಿ. ಎಲ್. ಸುಧಾಕರ್ ಸ್ವಾಗತಿಸಿ, ರಾಮಮೋಹನ್ ವಂದಿಸಿದರು. ಮೂರು ಜಿಲ್ಲೆಗಳಿಂದ 20 ಅಭ್ಯರ್ಥಿಗಳು ಶಿಕ್ಷಾ ವರ್ಗದಲ್ಲಿ ಭಾಗವಹಿಸಿದ್ದಾರೆ. ಮೇ 1ರಂದು ವರ್ಗ ಮುಕ್ತಾಯಗೊಳ್ಳುತ್ತದೆ.

### ಶಿವಮೊಗ್ಗ ಅಡಿಕೆ ಧಾರಣೆ

ತಾ|| 20.4.1987

ಸರಕು : 3300 – 3800

ಬೆಟ್ಟೆ : 1863 – 3236

ಗೊರಬಲು : 819–1029

ಸಾಗರ ಅಡಿಕೆ ತಾ|| 22.4.87

ಇಡಿ ಅಡಿಕೆ ರೂ. 1689–1939

ಆಪಿ ರೂ. 3299

ಸಿಪ್ಪೆ ಗೋಟು ರೂ. 539–700

ಮೆಣಸು ರೂ. 4002–5050

### ಏತ ನೀರಾವರಿಗೆ ಮನವಿ

ಹರಿಹರಪುರ: ಈ ಮಂಡಲ ಪಂಚಾಯ್ತಿ ವ್ಯಾಪ್ತಿಯ ಮುಡುಮುಡಿಯಲ್ಲಿ (ತಮ್ಮಡವಳ್ಳಿ ಗ್ರಾಮ) ಸಣ್ಣ, ಅತಿ ಸಣ್ಣ ರೈತರ ಸುಮಾರು 15 ಕುಟುಂಬಗಳವರು ಸಾಗುವಳಿ ಮಾಡುತ್ತಿರುವ ಅಲ್ಪ ಸ್ವಲ್ಪ ಜಮೀನಿಗೆ ನೀರಿನ ತೊಂದರೆ ಬಹಳವಾಗಿದೆ. ಸ್ವಲ್ಪವೇ ದೂರದಲ್ಲಿ ತುಂಗಾನದಿ ಹರಿಯುತ್ತಿದ್ದು, ಅಲ್ಲಿಂದ ಏತ ನೀರಾವರಿ ವ್ಯವಸ್ಥೆ ಮಾಡಿಸಿಕೊಡಬೇಕೆಂದು ಈ ಬಡರೈತರುಗಳು ಸರ್ಕಾರಕ್ಕೆ ಮನವಿ ಮಾಡಿಕೊಂಡಿದ್ದು ನೀರಾವರಿ ಮಂತ್ರಿ ದೇವೇಗೌಡರವರಿಗೂ ಮನವಿ ಕಳಿಸಿದ್ದಾರೆ. ಈಗ ಜಿಲ್ಲಾ ಪರಿಷತ್ ಆಳ್ವಿಕೆಯಲ್ಲಾದರೂ ಈ ಕಾರ್ಯ ಆಗಲೆಂದು ಒತ್ತಾಯಿಸಿದ್ದಾರೆ.

## ನ.ರಾ. ಪುರ : 'ಕೃಷಿ ಭವನ' ಉದ್ಘಾಟನೆ

ನ.ರಾ. ಪುರ: ಇಲ್ಲಿನ ಭೂ ಅಭಿವೃದ್ಧಿ ಬ್ಯಾಂಕ್ 280 ಲಕ್ಷ ರೂ. ವೆಚ್ಚದಿಂದ ನೂತನವಾಗಿ ನಿರ್ಮಿಸಿರುವ 'ಕೃಷಿ ಭವನ' ವನ್ನು ಶಾಸಕ ಗೋವಿಂದ ಗೌಡರು ಏ. 14 ರಂದು ಉದ್ಘಾಟಿಸಿದರು. ರಾಜ್ಯ ಕೃಷಿ ಮತ್ತು ಗ್ರಾ|| ಬ್ಯಾಂಕ್ ಅಧ್ಯಕ್ಷ ಬಿ. ಎಸ್. ವಿಶ್ವನಾಥನ್ ಅಧ್ಯಕ್ಷತೆ ವಹಿಸಿದ್ದು, ಜಿಲ್ಲಾ ಪರಿಷತ್ ಅಧ್ಯಕ್ಷ ಕೆ.ಎಂ ಕೃಷ್ಣಮೂರ್ತಿ, ಮೀಗ ಚಂದ್ರಶೇಖರ್, ಕೆ. ಎಂ. ಶ್ರೀನಿವಾಸ್, ಬಿ. ಸಿ. ಗೀತಾ ಮುಖ್ಯ ಅತಿಥಿಗಳಾಗಿದ್ದರು.

ಇದೇ ಸಂದರ್ಭದಲ್ಲಿ, 14 ವರ್ಷಗಳಷ್ಟು ದೀರ್ಘ ಕಾಲ ಬ್ಯಾಂಕಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಎಚ್.ಪಿ ತಿಮ್ಮಯ್ಯ ಗೌಡರನ್ನು ಸನ್ಮಾನಿಸಲಾಯಿತು.

ಸಾರ್ವಜನಿಕ ಸಭೆ–ಸಮಾರಂಭಗಳಿಗೆ, ಮದುವೆಯಂಥ ಕಾರ್ಯಕ್ರಮಗಳಿಗೆ ಈ ಭವನ ಬಹಳ ಉಪಯುಕ್ತವಾಗಲಿದೆ.

### ಬ್ಯಾಡ್ಮಿಂಟನ್ ಟೂರ್ನಿ

ಬಾಳೆಹೊನ್ನೂರು: ಇಲ್ಲಿನ ಕಿರಿಯ ಕಾಲೇಜು ಆವರಣದಲ್ಲಿ ಏ. 26, 27 ಮತ್ತು 28 ರಂದು ಜೇಸೀಸ್ ಆಶ್ರಯದ ಶಟಲ್ ಬ್ಯಾಡ್ಮಿಂಟನ್ ಸಿಂಗಲ್ಸ್ ಮತ್ತು ಡಬಲ್ಸ್ ಟೂರ್ನಿ ನಡೆಯುತ್ತದೆ.

### ನೆಮ್ಮಾರಿನಲ್ಲಿ ಅಂಬೇಡ್ಕರ್ ದಿನಾಚರಣೆ

ನೆಮ್ಮಾರು: ಅಂಬೇಡ್ಕರ್ ಜನ್ಮ ದಿನಾಚರಣೆಯನ್ನು ಸ|| ವಿದ್ಯಾಧಿಕಾರಿ ಚನ್ನಪ್ಪನವರ ಅಧ್ಯಕ್ಷತೆಯಲ್ಲಿ ಏ. 19ರಂದು ಆಚರಿಸಲಾಯಿತು. ಮಂಡಲ ಪ್ರಧಾನರಾದ ಸುಧಾಕರ್, ಉಪ ಪ್ರಧಾನರಾದ ಕಾಳಯ್ಯ, ಸ|| ಕೃಷಿ ನಿರ್ದೇಶಕ ರಂಗದಾಸ ಶೆಟ್ಟಿ ಮುಖ್ಯ ಅತಿಥಿಗಳಾಗಿದ್ದರು. ಕಚ್ಚೋಡಿ ಶ್ರೀನಿವಾಸ್ 34 ಮಂದಿ ಗಿರಿಜನರಿಗೆ ಕೃಷಿ ಉಪಕರಣ ವಿತರಿಸಿದರು. ತಹಸೀಲ್ದಾರ್ ಪ್ರಭಾಕರ ಶರ್ಮ ಸ್ವಾಗತಿಸಿ, ಸುಬ್ಬರಾಯ ಶರ್ಮ ವಂದಿಸಿದರು.

### ಸಂಬಾರ ಮಂಡಳಿ

ಮೂಡಿಗೆರೆ: ಈವರೆಗೆ ಬೇರೆ ಬೇರೆಯಾಗಿದ್ದ ಏಲಕ್ಕಿ ಮಂಡಳಿ ಹಾಗೂ ಸಂಬಾರ ಪದಾರ್ಥಗಳ ರಫ್ತು ಅಭಿವೃದ್ಧಿ ನಿಗಮ– ಇವೆರಡನ್ನು ಸೇರಿಸಿ ಒಂದೇ 'ಸಂಬಾರ ಮಂಡಳಿ'ಯನ್ನು ಕೇಂದ್ರ ಸರ್ಕಾರವು ಹೊಸದಾಗಿ ಸೃಷ್ಟಿಸಿದೆ.

ಈ ಎರಡೂ ಸಂಸ್ಥೆಗಳ ಜೊತೆಗೆ ಈವರೆಗೆ ನಡೆಯುತ್ತಿದ್ದ ಎಲ್ಲಾ ಸಂಪರ್ಕ ಮತ್ತು ವ್ಯವಹಾರಗಳನ್ನು ಇನ್ನು ಮುಂದೆ ಇದೇ ಹೆಸರಿನಲ್ಲಿ ನಡೆಸಲಾಗುವುದೆಂದು ಮಂಡಳಿಯ ಸಹನಿರ್ದೇಶಕರು ತಿಳಿಸಿದ್ದಾರೆ.

### ಧಾರ್ಮಿಕ ಮಾಸ ಪತ್ರಿಕೆ ಮೂರನೇ ವರ್ಷಕ್ಕೆ

ನ. ರಾ. ಪುರ: ಇಲ್ಲಿನ ಬಸ್ತಿಮಠದಿಂದ ಚಂದ್ರಸಾಗರ ವರ್ಣೀಜಿಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿರುವ 'ಸಮಂತಭದ್ರ ವಾಣಿ' ಧಾರ್ಮಿಕ ಮಾಸ ಪತ್ರಿಕೆಯು ಮೂರನೇ ವರ್ಷಕ್ಕೆ ಪಾದಾರ್ಪಣ ಮಾಡುವ ಸಂದರ್ಭದಲ್ಲಿ ಮೇ 9ರಂದು ಲಕ್ಷ್ಮೀಸೇನ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮವನ್ನು ಸಂಯೋಜಿಸಲಾಗಿದೆ.

### 'ಅಭಿರಾಮ ಬಾಲವಿಕಾಸ'

ಹರಿಹರಪುರ: ಇಲ್ಲಿನ ಮಠಾಧೀಶರ 67 ನೇ ವರ್ಧಂತಿಯ ಕೊಡುಗೆಯಾಗಿ 'ಅಭಿರಾಮ ಬಾಲವಿಕಾಸ' ಎಂಬ ಶಿಶು ವಿಹಾರವನ್ನು ಸ್ವಾಮೀಜಿಯವರ ಅಧ್ಯಕ್ಷತೆಯಲ್ಲಿ ಉಮಾ ಸುಬ್ಬಣ್ಣ ಏ. 11 ರಂದು ನೆರವೇರಿಸಿದರು. ಸಮಗ್ರ ಬಾಲವಿಕಾಸ ಯೋಜನಾಧಿಕಾರಿ ರುದ್ರಪ್ಪ ಮುಖ್ಯ ಅತಿಥಿಯಾಗಿದ್ದರು. ಇದರ ಅಂಗವಾಗಿ ಯಕ್ಷಗಾನ ಪ್ರದರ್ಶಿಸಿದ ರಾಮಾನಂದ ಬಾಲಿಕಾ ಪಾಠಶಾಲೆಯ ವಿದ್ಯಾರ್ಥಿನಿಯರಿಗೆ ಕೆ. ಜಿ. ಎಲ್. ಶಾಸ್ತ್ರಿ ಬಹುಮಾನ ವಿತರಿಸಿದರು.

### ಕುಟುಂಬ ಯೋಜನೆ: ಕೊಪ್ಪ-ಜಿಲ್ಲೆಗೆ ದ್ವಿತೀಯ; ನ.ರಾ.ಪುರ-ಗುರಿಮೀರಿಸಾಧನೆ

ಕೊಪ್ಪ: ಕುಟುಂಬ ಯೋಜನೆ ಅನುಷ್ಠಾನದಲ್ಲಿ ಕೊಪ್ಪ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆಗೆ 1986–87ನೇ ಸಾಲಿನಲ್ಲಿ 2ನೇ ಸ್ಥಾನ ಪಡೆದಿದೆ. ಇದಕ್ಕೆ ನೆರವಾದ ಎಲ್ಲಾ ಕಾರ್ಯಕರ್ತರಿಗೂ, ವಿವಿಧ ಇಲಾಖೆಗಳ ಅಧಿಕಾರಿಗಳಿಗೂ ವೈದ್ಯಾಧಿಕಾರಿ ಡಾ|| ಎಂ.ಜಿ. ಪ್ರಸಾದ್ ಕೃತಜ್ಞತೆ ಸಲ್ಲಿಸಿದ್ದಾರೆ.

ನ.ರಾ ಪುರದ ಸರ್ಕಾರಿ ಆಸ್ಪತ್ರೆಗೆ ಇದೇ ಅವಧಿಗೆ ನೀಡಿದ್ದ 485ರ ಗುರಿಯನ್ನು ಮೀರಿ 602 ಜನರಿಗೆ ಶಸ್ತ್ರ ಚಿಕಿತ್ಸೆ ನಡೆಸಲಾಗಿದ್ದು (ಶೇ. 124ರಷ್ಟು ಸಾಧನೆ) ಇಂಥ ಪ್ರಮಾಣದ ಗುರಿ ಮೀರಿದ ಸಾಧನೆ ಇದೇ ಮೊದಲೆನ್ನಲಾಗಿದೆ. 1979ರಲ್ಲಿ 776ರಷ್ಟಿದ್ದ ಮಲೇರಿಯಾ ಪ್ರಕರಣಗಳು ಈಗ ಸಂಪೂರ್ಣ ನಿಲುಗಡೆಯಾಗಿದ್ದು, ಆರೋಗ್ಯ ಸಂಬಂಧವಾದ ಎಲ್ಲ ಕಾರ್ಯಕ್ರಮಗಳಲ್ಲೂ ಈ ಆಸ್ಪತ್ರೆ ಕಳೆದೊಂದು ವರ್ಷದಿಂದ ಗಣನೀಯ ಮುನ್ನಡೆ ಸಾಧಿಸಿದೆಯೆಂದು ಆಸ್ಪತ್ರೆಯ ಸಿಬ್ಬಂದಿ ತಿಳಿಸಿದ್ದಾರೆ.

### ಶೃಂಗೇರಿ ಗುರುಗಳಿಂದ ಕಮಂಡಲಕ್ಕೆ ಕುಂಭಾಭಿಷೇಕ

ಕೊಪ್ಪ: ಇಲ್ಲಿಗೆ ಸಮೀಪದ ಕೆಸವೆಯಲ್ಲಿ ನಿಸರ್ಗ ರಮಣೀಯವಾದ ಕಮಂಡಲ ಗಣಪತಿ ದೇವಸ್ಥಾನದ ಕುಂಭಾಭಿಷೇಕವನ್ನು ಶೃಂಗೇರಿಯ ಹಿರಿಯ ಗುರುಗಳು ಈಚೆಗೆ ನೆರವೇರಿಸಿದರು.





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಕಿಗೆ ಅಚ್ಚು ಕೂಟ, ಕೊಪ್ಪ.